''ನಾನು ಪುಣ್ಯಕರವಾದ ಕುರುಕ್ಷೇತ್ರಕ್ಕೆ ಹೋಗಬೇಕೆಂದಿರುವೆನು. ಅಲ್ಲಿ ದೈತ್ಯಪತಿಯಾದ ಬಲಿಚಕ್ರವರ್ತಿಯ ಪುಣ್ಯಕರವಾದ ಅಶ್ವಮೇಧವು ನಡೆಯುತ್ತಿದೆ. ಅಲ್ಲಿಗೆ ಹೋಗಲು ನನಗೆ ಅಪ್ಪಣೆ ಕೊಡು. ಕುರುಕ್ಷೇತ್ರದಲ್ಲಿ ನಡೆಯುತ್ತಿರುವ ಅಶ್ವಮೇಧಯಾಗದ ಆಚರಣೆಯಿಂದ ಭೂಮಂಡಲದಲ್ಲೆಲ್ಲ ತೇಜಸ್ಸು ವಿಸ್ತರಿಸಿದೆ. ಇದೇ ಕಾರಣದಿಂದಾಗಿ ಬಲಿಯು ಆ ಕ್ಷೇತ್ರದಲ್ಲಿ ಯಜ್ಞವನ್ನು ಮಾಡುತ್ತಲಿರುವನು.''

ಈ ರೀತಿಯ ವಾಮನನ ಪ್ರಶ್ನೆಗೆ ಭರದ್ವಾಜರು ಹೇಳುತ್ತಾರೆ. ''ನಿನಗೆ ಆಜ್ಞೆ ಮಾಡಲು ನಾನು ಸಮರ್ಥನಲ್ಲ. ನೀನು ನಿನ್ನ ಇಚ್ಛೆಯಂತೆ ವರ್ತಿಸು. ಬಲಿಯ ಯಾಗಕ್ಕೆ ನಾವೆಲ್ಲರೂ ಶೀಘ್ರವಾಗಿಯೇ ಹೊರಡುವೆವು. ಎಲೈ ಪುರುಷೋತ್ತಮನೇ, ಯಾವ ಯಾವ ಸ್ಥಳಗಳಲ್ಲಿ ನಿನ್ನ ವಿಶೇಷ ಸಾನ್ನಿಧ್ಯವಿರುವದು ? ಅದನ್ನು ನನಗೋಸ್ಕರ ನೀನು ಹೇಳು'' ಎಂದು ಕೇಳಿದನು. ವಿಷ್ಣುವು ಹೇಳುತ್ತಾನೆ. ಯಾವ ಯಾವ ಸ್ಥಳದಲ್ಲಿ ನಾನು ನಾಮರೂಪದಿಂದ ವಾಸಮಾಡುತ್ತೇನೋ, ಅವುಗಳನ್ನು ಹೇಳುತ್ತೇನೆ ಕೇಳು. ಭೂಮಿ, ಆಕಾಶ, ಪಾತಾಳ, ಸಮುದ್ರ, ಸ್ವರ್ಗ, ದಿಕ್ಕು ಇವೆಲ್ಲವೂ ನನಗೆ ಅಪರೂಪವಾದ ವ್ಯಾಪ್ತಿಯ ಸ್ಥಳಗಳು. ಸ್ವರ್ಗ, ಭೂಮಿ, ಜಲಾಕಾಶಗಳಲ್ಲಿ ಸಂಚರಿಸುವ ಪ್ರಾಣಿಗಳೆಲ್ಲರೂ ಇಂದ್ರ ಸೂರ್ಯ ಚಂದ್ರ ಮೊದಲಾದ ದೇವತೆಗಳೆಲ್ಲರೂ, ಪಶುಪಕ್ಷ್ಯಾದಿಗಳೂ ಸಹ ನನ್ನಿಂದಲೇ ಉತ್ಪತ್ತಿ ಹೊಂದಿರುವವು. ದೇವಸೇವಿತರಾದ ಪುಣ್ಯಶಾಲಿಗಳಾದ ಮಹಾತ್ಮರೂ ಯಾರ ದರ್ಶನವು ಸಮಸ್ತ ಪಾಪಗಳ ನಾಶಕ್ಕೆ ಕಾರಣವೋ, ಅಂತಹ ಮಹಾವ್ಯಕ್ತಿಗಳು ಎಲ್ಲ ಮನುಷ್ಯರೂ ನನ್ನಿಂದಲೇ ಉತ್ಪನ್ನವಾಗಿರುವರು.''

ವಾಮನ ಮಹಾಪುರಾಣದಲ್ಲಿ ಎಂಬತ್ತೊಂಬತ್ತನೇಯ ಅಧ್ಯಾಯವು ಮುಗಿದುದು.

—o—